# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1078 |
| ಮಾನ್ಯ ಸದಸ್ಯರ ಹೆಸರು | ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ಸಚಿವರು | ಮಾನ್ಯ ಉಪಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಉತ್ತರಿಸಬೇಕಾದ ದಿನಾಂಕ | 15.03.2021 |

| | ಪ್ರಶ್ನೆ | ಉತ್ತರ |
|---|---|---|
| (ಅ) | ಮೈಸೂರು ಮಹಾರಾಜ ಕಾಲೇಜಿನ ಮೇಲ್ಚಾವಣಿ (ಸೀಲಿಂಗ್) ಕುಸಿದು ಬಿದ್ದು ವಿದ್ಯಾರ್ಥಿಗಳು ಗಾಯಗೊಂಡಿರುವ ಘಟನೆ ಸರ್ಕಾರದ ಗಮನಕ್ಕೆ ಬಂದಿದೆಯೇ; ನೂರು ವರ್ಷಗಳಷ್ಟು ಹಳೆಯದಾದ ಮಹಾರಾಜಾ ಕಾಲೇಜನ್ನು ಪಾರಂಪರಿಕ ಕಟ್ಟಡ ಎಂದು ಘೋಷಿಸಿ ಅದರ ಪೂರ್ಣ ದುರಸ್ಥಿಗೆ ಕೂಡಲೇ ಕ್ರಮ ತೆಗೆದುಕೊಳ್ಳಲಾಗುವುದೇ; | ಮೈಸೂರು ಮಹಾರಾಜ ಕಾಲೇಜಿನ ಮೇಲ್ಚಾವಣಿ (ಸೀಲಿಂಗ್) ಕುಸಿದು ಬಿದ್ದು ವಿದ್ಯಾರ್ಥಿಗಳು ಗಾಯಗೊಂಡಿರುವ ಘಟನೆ ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಮಹಾರಾಜ ಕಾಲೇಜು ಈಗಾಗಲೇ ಪಾರಂಪರಿಕ ಕಟ್ಟಡ ಎಂದು ಈಗಾಗಲೇ ಘೋಷಿಸಲ್ಪಟ್ಟಿದ್ದು, ಪಾರಂಪರಿಕ ತಜ್ಞರ ಸಮಿತಿಯ ಸದಸ್ಯರೊಂದಿಗೆ ಈ ಕಟ್ಟಡ ದುರಸ್ಥಿ ಸಂಬಂಧ ವಿಶ್ವವಿದ್ಯಾನಿಲಯವು ಸ್ಥಳ ಪರಿಶೀಲನೆ ನಡೆಸಿದ್ದು, ಅವಶ್ಯಕ ದುರಸ್ಥಿಯನ್ನು ಕೈಗೊಳ್ಳಲು ಕ್ರಮ ಕೈಗೊಳ್ಳುತ್ತಿದೆ. |
| (ಆ) | ಮೈಸೂರು ವಿಶ್ವವಿದ್ಯಾನಿಲಯದ ಮಾನಸಗಂಗೋತ್ರಿ ಆವರಣದಲ್ಲಿರುವ ಅಪರಾಧ ಮತ್ತು ನ್ಯಾಯಶಾಸ್ತ್ರ ವಿಭಾಗದ ಕಟ್ಟಡ, ಜಯಲಕ್ಷ್ಮೀ ವಿಲಾಸ ಮ್ಯಾನ್ಷನ್ ಮೊದಲಾದ ಹಳೆಯ ಪಾರಂಪರಿಕ ಕಟ್ಟಡಗಳನ್ನು ದುರಸ್ಥಿ ಮತ್ತು ನಿರ್ವಹಣೆ ಮಾಡಲು ಕ್ರಮ ತೆಗೆದುಕೊಳ್ಳಲಾಗುವುದೆ; | ಮೈಸೂರು ವಿಶ್ವವಿದ್ಯಾನಿಲಯದ ಆಡಳಿತಕ್ಕೊಳಪಡುವ ಮಹಾರಾಜ ಕಾಲೇಜು, ಅಪರಾಧ ಮತ್ತು ನ್ಯಾಯಶಾಸ್ತ್ರ ವಿಭಾಗದ ಕಟ್ಟಡ, ಜಯಲಕ್ಷ್ಮೀ ವಿಲಾಸ ಮ್ಯಾನ್ಷನ್ ಕಟ್ಟಡ ಮತ್ತು ಕ್ರಾಫರ್ಡ್ ಹಾಲ್ ಕಟ್ಟಡಗಳನ್ನು ಒಳಗೊಂಡಂತೆ ವಿಶ್ವವಿದ್ಯಾನಿಲಯದ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಪಾರಂಪರಿಕ ಹಾಗೂ ಹಳೆಯ ಕಟ್ಟಡಗಳನ್ನು ದುರಸ್ತಿಪಡಿಸುವ ಸಂಬಂಧ ಮೈಸೂರು ವಿಶ್ವವಿದ್ಯಾನಿಲಯವು ಪಾರಂಪರಿಕ ತಜ್ಞರ ಸಮಿತಿ ಸದಸ್ಯರೊಂದಿಗೆ ಸ್ಥಳ ಪರಿಶೀಲನೆ ನಡೆಸಿದ್ದು, ಅವಶ್ಯಕ ದುರಸ್ತಿ ಕಾರ್ಯವನ್ನು ಕೈಗೊಳ್ಳಲಿದೆ. |
| (ಇ) | ಮೈಸೂರು ವಿಶ್ವವಿದ್ಯಾನಿಲಯದ ಕಾರ್ಯಸೌಧ, ಕ್ರಾಫರ್ಡ್ ಹಾಲ್ ಕೂಡಾ ಪಾರಂಪರಿಕ ಕಟ್ಟಡವಾಗಿದ್ದು, ಈ ಕಟ್ಟಡದ ಆಡಳಿತ ವಿಭಾಗದ ಮೇಲ್ಚಾವಣಿ ಕುಸಿದು ಬಿದ್ದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಕಟ್ಟಡವನ್ನು ಕೂಡಾ ದುರಸ್ಥಿ ನಿರ್ವಹಣೆ ಮಾಡಲು ಜರುಗಿಸಲಾಗುವುದೆ? | |

ಸಂಖ್ಯೆ: ಇಡಿ 93 ಯುಎನ್ಇ 2021

(ಡಾ: ಅಶ್ವತ್ಥ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು
(ಉನ್ನತ ಶಿಕ್ಷಣ, ಐಟಿ ಬಿಟಿ, ವಿಜ್ಞಾನ ಮತ್ತು
ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಇಲಾಖೆ)